## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1559 |
| ಸದಸ್ಯರ ಹೆಸರು | : | ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 11-03-2022 |
| ಉತ್ತರಿಸುವ ಸಚಿವರು | : | ಕೃಷಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಭೂಚೇತನ ಕಾರ್ಯಕ್ರಮದ ಗುರಿ ಮತ್ತು ಉದ್ದೇಶಗಳೇನು; ಈ ಯೋಜನೆ ಜಾರಿಗೆ ಬಂದ ನಂತರ ಇಳುವರಿ ಪ್ರಮಾಣ ಎಷ್ಟು ಹೆಚ್ಚಳವಾಗಿದೆ; ಈ ಹಿಂದಿನ ಇಳುವರಿ ಪ್ರಮಾಣಕ್ಕೆ ಹೋಲಿಸಿದ್ದಲ್ಲಿ, ಭೂಚೇತನ ಕಾರ್ಯಕ್ರಮದಿಂದ ರೈತರಿಗೆ ಅನುಕೂಲವಾಗಿದೆಯೇ; ಪ್ರಸ್ತುತ ಸದರಿ ಕಾರ್ಯಕ್ರಮವನ್ನು ಮುಂದುವರೆಸಲಾಗಿದೆಯೇ; ಅಥವಾ ವಿನೂತನ ಕಾರ್ಯಕ್ರಮದಲ್ಲಿ ವಿಲೀನಗೊಳಿಸಲಾಗಿದೆಯೇ; (ಮಾಹಿತಿ ನೀಡುವುದು) | ರಾಜ್ಯ ಸರ್ಕಾರವು "ಭೂಚೇತನ ಯೋಜನೆಯನ್ನು 2009-10 ರಿಂದ 2012-13ನೇ ಸಾಲಿನವರೆಗೆ ಮೊದಲನೇ ಹಂತದಲ್ಲಿ ಮತ್ತು 2013-14 ರಿಂದ 2017-18 ರವರೆಗೆ ಎರಡನೇ ಹಂತವಾಗಿ ಅನುಷ್ಠಾನ ಮಾಡಲಾಗಿದೆ.<br><br>**ಭೂಚೇತನ ಕಾರ್ಯಕ್ರಮದ ಗುರಿ ಮತ್ತು ಉದ್ದೇಶಗಳು;**<br><br>ಮಳೆಯಾಶ್ರಿತ ಬೆಳೆಗಳ ಉತ್ಪಾದಕತೆಯನ್ನು ಯೋಜನೆಯ ಅವಧಿಯಲ್ಲಿನ ಪ್ರಸಕ್ತ ಹಂತದಿಂದ ಶೇ 20ರಷ್ಟು ಹೆಚ್ಚಿಸುವ ಗುರಿ ಹೊಂದಲಾಗಿರುತ್ತದೆ. ಪ್ರಸಕ್ತ ಸನ್ನಿವೇಶದಲ್ಲಿ ಆಗುತ್ತಿರುವ ಹವಾಮಾನ ಬದಲಾವಣೆಗಳನ್ನು ವಿಶ್ಲೇಷಿಸಿ ಉತ್ಪಾದಕತೆ ಹೆಚ್ಚಿಸುವ ತಾಂತ್ರಿಕತೆಗಳನ್ನು ಬಲಪಡಿಸುವುದರೊಂದಿಗೆ ಯೋಜನೆಗಳಲ್ಲಿ ಪಾಲ್ಗೊಳ್ಳುವ ಸಂಸ್ಥೆಗಳ, ವಿಸ್ತರಣಾ ಅಧಿಕಾರಿಗಳ ಹಾಗೂ ರೈತರ ಸಾಮರ್ಥ್ಯ ವನ್ನು ಹೆಚ್ಚಿಸುವುದು.<br><br>ಮಣ್ಣು ಪರೀಕ್ಷೆ ಆಧಾರಿತ ಪೋಷಕಾಂಶಗಳ ನಿರ್ವಹಣೆ ಈ ಯೋಜನೆಯ ಪ್ರಮುಖ ಅಂಶವಾಗಿರುತ್ತದೆ. ಈ ಯೋಜನೆ ಜಾರಿಗೆ ಬಂದ ನಂತರ ಭೂಚೇತನ ತಾಂತ್ರಿಕತೆ ಅಳವಡಿಸಿದ ತಾಲ್ಲೂಕುಗಳಲ್ಲಿ, ವಿವಿಧ ಬೆಳೆಗಳಲ್ಲಿ ಶೇ.13. ರಿಂದ ಶೇ.32 ರ ವರೆಗೆ ಇಳುವರಿ ಹೆಚ್ಚಳವಾಗಿರುವುದು ಬೆಳೆ ಕಟಾವು ಪ್ರಯೋಗಗಳಿಂದ ಕಂಡುಬಂದಿರುತ್ತದೆ.<br><br>ಈ ಯೋಜನೆಯಡಿ ರೈತರ ಕೌಶಲ್ಯ ಮತ್ತು ಸಾಮರ್ಥ್ಯ ವೃದ್ಧಿಗೆ ಜಿಲ್ಲಾ ಹಂತದಿಂದ ಗ್ರಾಮ ಮಟ್ಟದವರೆಗೆ ತರಬೇತಿಗಳು, ರೈತರಿಗೆ ಅರಿವು ಮೂಡಿಸುವುದು, ಕ್ಷೇತ್ರ ಪಾಠಶಾಲೆಗಳಿಂದ ಮತ್ತು ತಾಂತ್ರಿಕತೆಗಳ ಅಳವಡಿಕೆಗೆ ಪೂರಕವಾಗಿ ಬಿತ್ತನೆ ಬೀಜ, ಜಿಪ್ಸಂ, ಲಘುಪೋಷಕಾಂಶ, ಜೈವಿಕಗೊಬ್ಬರ, ಮತ್ತಿತರ ಅವಶ್ಯಕ ಪರಿಕರಗಳನ್ನು ಶೇ.50 ರಿಯಾಯಿತಿ ದರದಲ್ಲಿ ಗುಚ್ಛ ಗ್ರಾಮ ಮಟ್ಟದಲ್ಲಿ ಒದಗಿಸಲಾಗಿದೆ. ಭೂಚೇತನ ತಾಂತ್ರಿಕತೆಗಳನ್ನು ಅಳವಡಿಸಿಕೊಂಡ ರೈತರ ಕ್ಷೇತ್ರದಲ್ಲಿ ಇಳುವರಿ ಹೆಚ್ಚಳವಾಗುವ ಮೂಲಕ ರೈತರಿಗೆ ಅನುಕೂಲವಾಗಿದೆ.<br><br>2017-18 ರಲ್ಲಿ ಭೂಚೇತನ ಕಾರ್ಯಕ್ರಮ ಮುಕ್ತಾಯಗೊಂಡಿದ್ದು, ಭೂಚೇತನ ಕಾರ್ಯಕ್ರಮದಡಿ ಅನುಷ್ಠಾನ ಮಾಡಲಾದ ಘಟಕಗಳಾದ ಸಮಗ್ರ ಪೋಷಕಾಂಶ ನಿರ್ವಹಣೆ, ಪ್ರಾತ್ಯಕ್ಷತೆ ಮತ್ತು ತರಬೇತಿಗಳನ್ನು ಇಲಾಖೆಯ ಇತರೆ ಯೋಜನೆಗಳಾದ ಮಣ್ಣಿನ ಸತ್ವ ಹೆಚ್ಚಿಸುವ ಕಾರ್ಯಕ್ರಮ, ರಾಷ್ಟ್ರೀಯ ಆಹಾರ ಭದ್ರತಾ ಅಭಿಯಾನ ಯೋಜನೆಗಳಡಿ ವಿಲೀನಗೊಳಿಸಿ ಅನುಷ್ಠಾನ ಮಾಡಲಾಗುತ್ತಿದೆ. |

| | | |
|---|---|---|
| ಆ) | ರೈತ ಸಿರಿ ಯೋಜನೆಯಡಿ ಬೆಳೆಗಾರರನ್ನು ಉತ್ತೇಜಿಸಲು ಇಲ್ಲಿಯವರೆಗೆ ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಗೆ ಬಿಡುಗಡೆಯಾದ ಅನುದಾನವೆಷ್ಟು; ಸದರಿ ಯೋಜನೆಯಡಿ ಎಷ್ಟು ಫಲಾನುಭವಿಗಳಿಗೆ ಅನುದಾನ ನೀಡಲಾಗಿದೆ? (ತಾಲ್ಲೂಕುವಾರು ಮಾಹಿತಿ ನೀಡುವುದು) | ರೈತ ಸಿರಿ ಯೋಜನೆಯಡಿ ಸಿರಿಧಾನ್ಯ ಬೆಳೆಗಾರರನ್ನು ಉತ್ತೇಜಿಸಲು ಇಲ್ಲಿಯವರೆಗೆ ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯ ಫಲಾನುಭವಿಗಳಿಗೆ ಬಿಡುಗಡೆಯಾದ ಅನುದಾನ ಹಾಗೂ ಫಲಾನುಭವಿಗಳ ಸಂಖ್ಯೆಯನ್ನು ಈ ಕೆಳಗಿನಂತೆ ನೀಡಲಾಗಿದೆ. |

| ಕ್ರ. ಸಂ | ಜಿಲ್ಲೆ | ತಾಲ್ಲೂಕು | ಬಿಡುಗಡೆಯಾದ ಅನುದಾನ **(ರೂ ಲಕ್ಷಗಳಲ್ಲಿ)** | ಫಲಾನುಭವಿಗಳ ಸಂಖ್ಯೆ |
|---|---|---|---|---|
| 1 | ಬೆಂಗಳೂರು ಗ್ರಾಮಾಂತರ | ದೇವನಹಳ್ಳಿ | 1.04 | 27 |
| 2 | | ದೊಡ್ಡಬಳ್ಳಾಪುರ | 1.02 | 24 |
| 3 | | ಹೊಸಕೋಟೆ | 2.55 | 52 |
| 4 | | ನೆಲಮಂಗಲ | 3.23 | 39 |
| | | **ಒಟ್ಟು** | **7.84** | **142** |
| 1 | ರಾಮನಗರ | ಮಾಗಡಿ | 5.04 | 80 |
| 2 | | ಕನಕಪುರ | 2.92 | 50 |
| 3 | | ರಾಮನಗರ | 7.97 | 104 |
| 4 | | ಚನ್ನಪಟ್ಟಣ | 4.15 | 67 |
| | | **ಒಟ್ಟು** | **20.08** | **301** |

ರೈತಸಿರಿ ಯೋಜನೆಯಡಿ ಪ್ರೋತ್ಸಾಹಧನ ಪಾವತಿಯು ಪ್ರಗತಿಯಲ್ಲಿರುತ್ತದೆ.

ಸಂಖ್ಯೆ: AGRI-AML/71/2022

(ಬಿ.ಸಿ. ಪಾಟೀಲ್)
ಕೃಷಿ ಸಚಿವರು